KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಡಿಸೆಂಬರ್ ೨೪, ೨೦೦೯ (ಪುಷ್ಯ ೩, ಶಕ ವರ್ಷ ೧೯೩೧) | ಸಂಚಿಕೆ ೫೧ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–27/08–09, ದಿನಾಂಕ:21ನೇ ನವೆಂಬರ್, 2009**

**ಉಪಸ್ಥಿತರು:** ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು:** ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ.
(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು:** (1) ಮಂಜ, (2) ಹಳೇತಲೆ ಗಣಪತಿ (3) ಕುಂಬತ್ತಿ ಜಯ

**ಭಾದ್ಯತೆದಾರರು:** ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:07–10–2008ರಂದು ಸಾಗರ ವಲಯದ ತ್ಯಾಗರ್ತಿ ಶಾಖೆಯ ವನಪಾಲಕ ಮತ್ತು ರಾತ್ರಿ ಗಸ್ತು ಪಡೆಯ ಸಿಬ್ಬಂದಿಯವರು ಸಾಗರ ತಾಲ್ಲೂಕು ಕಸಬಾ ಹೋಬಳಿ ಜಂಬಾನಿ ಗ್ರಾಮದ ಕೆರೆಯ ಏರಿಯ ಮೇಲೆ ಪಿಡಬ್ಲ್ಯೂಡಿ ರಸ್ತೆಯಲ್ಲಿ ಗಸ್ತು ಮಾಡಿಕೊಂಡು ಬರುತ್ತಿರುವಾಗ ದಿನಾಂಕ:08–10–2008ರಂದು ಬೆಳಗಿನ ಜಾವ 6–00 ಗಂಟೆ ಸಮಯದಲ್ಲಿ ಒಂದು ವಾಹನ ಬರುತ್ತಿರುವುದನ್ನು ಬ್ಯಾಟರಿ ಬೆಳಕಿನ ಸಹಾಯದಿಂದ ನಿಲ್ಲಿಸಲು ಸೂಚಿಸಿದಾಗ ಸದರಿ ವಾಹನವನ್ನು ಸುಮಾರು 50 ಅಡಿ ದೂರದಲ್ಲಿ ನಿಲ್ಲಿಸಿ ವಾಹನದಲ್ಲಿದ್ದ ಅಸಾಮಿಗಳು ಕೈಗೆ ಸಿಗದೆ ಪರಾರಿಯಾದರು. ಓಡಿಹೋದ ಅಸಾಮಿಗಳು (1)ನೇಯವನು ಮಂಜು ಬಿನ್ ಸುಬ್ಬಯ್ಯ, 33 ವರ್ಷ, (2)ನೇ ಯವನು ಹಳೇತಲೆ ಗಣಪತಿ ಬಿನ್ ಹಳೇತಲೆ ರೇವಣಪ್ಪ (3)ನೇಯವನು ಕುಂಬತ್ತಿ ಜಯ ಬಿನ್ ಕುಂಬತ್ತಿ ರಾಮಚಂದ್ರ, 28 ವರ್ಷ. ಇವರೆಲ್ಲರೂ ಸಾಗರ ತಾಲ್ಲೂಕು ಕಸಬಾ ಹೋಬಳಿ ಬರೂರು ಗ್ರಾಮದ ಬಸವನ ಬ್ಯಾಣದ ವಾಸಿಗಳೆಂದು ಗುರುತಿಸಿರುತ್ತಾರೆ. ನಂತರ ವಾಹನದ ಹತ್ತಿರ ಹೋಗಿ ಪರಿಶೀಲಿಸಲಾಗಿ ಬಿಳಿ ಬಣ್ಣದ ಮಾರುತಿ ವ್ಯಾನ್ ಕೆಎ–05–ಎಂ–8907, ಛಾಸ್ಸಿಸ್ ನಂ: 91–IN–998604 ಆಗಿದ್ದು, ವಾಹನದೊಳಗಡೆ 4 ಬೀಟೆ ನಾಟಾಗಳಿದ್ದು, ಅದರ ಅಳತೆ 0.309ಎಂ3 ಇದ್ದು, ಈ ನಾಟಾಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಮತ್ತು ಈ ನಾಟಾವನ್ನು ಅಕ್ರಮವಾಗಿ ಕಡಿದು ಸಾಗಿಸಲು ಈ ವಾಹನ ಉಪಯೋಗಿಸಿರುವುದೆಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಸಾಗರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 70/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ

ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿನಾಂಕ:10–10–2009ರಂದು ಆದೇಶವಾಗಿದೆ.

ಈ ಪ್ರಕರಣದ ವಲಯ ಅರಣ್ಯಾಧಿಕಾರಿ, ಸಾಗರ ಇವರು ಈ ನ್ಯಾಯಾಲಯಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿ, ಆರೋಪಿಗಳ ವಿರುದ್ದ ನ್ಯಾಯಾಲಯಕ್ಕೆ ದೋಷಾರೋಪಣಾ ಪತ್ರ ಸಲ್ಲಿಸಲು ಕೋರಿರುತ್ತಾರೆ.

ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಜಯನಗರ (ದಕ್ಷಿಣ), ಬೆಂಗಳೂರು ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–27/08–09 ದಿನಾಂಕ:24–10–2008 ಮತ್ತು 25–03–2009ರಂದು ಪತ್ರ ಬರೆದು ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಆದರೆ ಇಲ್ಲಿಯವರೆವಿಗೂ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲವಾದ್ದರಿಂದ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ನಂತರ ಆರ್.ಸಿ. ಮಾಲಿಕರು ನ್ಯಾಯಾಲಯದ ಮೊರೆ ಹೋದಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಜಯನಗರ (ದಕ್ಷಿಣ), ಬೆಂಗಳೂರು ರವರೇ ನೇರ ಜವಾಬ್ದಾರರಾಗುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿನಾಂಕ:21–12–2008ರಂದು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿನಾಂಕ:11–12–2008ರಂದು ರಾಜ್ಯಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:31–10–2009 ರಂದು ವಾದ ಮಂಡಿಸಿ ಈ ವಾಹನದಲ್ಲಿ ನಂದಿ ನಾಟಾವನ್ನು ದಿನಾಂಕ:08–10–2008ರಂದು ಅಕ್ರಮವಾಗಿ ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಸಾಗರ ವಲಯ ಇವರು ಇಲಾಖಾ ಪರ ವಶಪಡಿಸಿಕೊಂಡು, ಅ.ಮೊ.ಸಂಖ್ಯೆ:70/08–09ನ್ನು ದಾಖಲಿಸಿ ವಾಹನ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಅಲ್ಲದೇ ಕಾನೂನು ರೀತ್ಯಾ ಪ್ರಚಾರ ಕಾರ್ಯ ಮುಗಿಸಿದ್ದು, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಸಾಗರ ಇವರು ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ಕೆಎ–05–ಎಂ–8907 (ಛಾಸ್ಸಿಸ್ ನಂ:91–IN–998604)ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 4=0.309ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:21–11–2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.1261

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–31/08–09, ದಿನಾಂಕ:21ನೇ ನವೆಂಬರ್, 2009**

| | |
|---|---|
| **ಉಪಸ್ಥಿತರು:** | ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ |
| **ಪಿರ್ಯಾಧಿದಾರರು :** | ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು:** | (1) ರಫೀಕ್, (2) ಸ್ಯೆಫುಲ್ಲಾ (3) ಅಲ್ಲಾ ಭಕ್ಷ್ |
| **ಭಾದ್ಯತೆದಾರರು :** | ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ. |

**ಪ್ರಸ್ತಾವನೆ:**

ದಿನಾಂಕ:12–07–2008ರಂದು ಆನಂದಪುರಂ ವಲಯ, ಚೋರಡಿಯ ಹಿರೇಹರಕ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಎಂದಿನಂತೆ ಇಲಾಖಾ ವಾಹನ ಕೆಎ–15–ಜಿ–86ರಲ್ಲಿ ರಾತ್ರಿ ಗಸ್ತು ಮುಗಿಸಿ ಬೆಳಗಿನ ಜಾವ ಹಿರೇಹರಕದ ಕಡೆಯಿಂದ ಚೋರಡಿ ಕಡೆಗೆ ಬರುತ್ತಿರುವಾಗ ಶಿವಮೊಗ್ಗ ತಾಲ್ಲೂಕು ಕುಂಸಿ ಹೋಬಳಿ ಕೋಣೆ ಹೊಸೂರು ಗ್ರಾಮದ ಸ.ನಂ: 5ರ ಕೋಣೆಹೊಸೂರು ರಸ್ತೆ ಪಕ್ಕದಲ್ಲಿರುವ ಅರಣ್ಯದ ಪ್ರದೇಶದಲ್ಲಿ ಮರ ಕಡಿದು ನಾಟಾಗಳನ್ನು ತಯಾರಿಸುತ್ತಿರುವುದನ್ನು ಕಂಡು ಸುತ್ತುವರೆದು ಹಿಡಿಯಲು ಯತ್ನಿಸಿದಾಗ ಅಸಾಮಿಗಳು ಕೈಗೆ ಸಿಗದೆ ಪರಾರಿಯಾಗಿರುತ್ತಾರೆ. ನಂತರ ವಾಹನವನ್ನು ಪರಿಶೀಲಿಸಲಾಗಿ, ಬಜಾಜ್ ಎಂ–80 ಕೆಎ–15–ಇ–2086, ಇಂಜಿನ್ ನಂ:E-16-DL-172975, ಛಾಸ್ಸಿಸ್ ನಂ:15-C-037505 ಇದ್ದು, ಬೀಟೆ ನಾಟಾ 2=0.475ಎಂ3 ಇದ್ದು, ಈ ನಾಟಾಗಳಿಗೆ ಇಲಾಖಾ ಛಾಪಾದ ಗುರುತಿರಲಿಲ್ಲ. ಆದ್ದರಿಂದ ಇದನ್ನು ಅಕ್ರಮವಾಗಿ ಕಡಿದು ಸಾಗಾಣಿಕೆ ಮಾಡಲಾಗುತ್ತಿದೆ ಎಂದು ಪರಿಗಣಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ತಯಾರಿಸಿ ಜಪ್ತಿವರದಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 33, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಆನವಟ್ಟಿ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:26/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿನಾಂಕ:22–11–2008ರಂದು ಆದೇಶವಾಗಿದೆ.

ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–31/08–09 ದಿನಾಂಕ:22–11–2008 ಮತ್ತು 25–03–2009ರಂದು ಪತ್ರ ಬರೆದು ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಆದರೆ ಇಲ್ಲಿಯವರೆವಿಗೂ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಸಾರಿಗೆ ಅಧಿಕಾರಿ, ಸಾಗರ ಇವರು ಸಲ್ಲಿಸಿರುವುದಿಲ್ಲ. ಈ ವಾಹನವನ್ನು ಹಾಗೇ ನಿಲ್ಲಿಸಿದಲ್ಲಿ ಹಾಳಾಗುವುದರಿಂದ ಮುಂದಿನ ಕ್ರಮ ಕೈಗೊಳ್ಳಲಾಯಿತು. ಅಲ್ಲದೇ ಈ ವಾಹನವನ್ನು ಮುಟ್ಟುಗೋಲು ಹಾಕಿಕೊಂಡ ನಂತರದಲ್ಲಿ ಆರ್.ಸಿ. ಮಾಲಿಕರು ನ್ಯಾಯಾಲಯದ ಮೊರೆ ಹೋದಲ್ಲಿ ಅದಕ್ಕೆ ಸಾರಿಗೆ ಅಧಿಕಾರಿ, ಸಾಗರ ಇವರೇ ನೇರ ಜವಾಬ್ದಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿನಾಂಕ:02–12–2008ರಂದು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿನಾಂಕ:11–12–2008ರಂದು ರಾಜ್ಯಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:31–10–2009 ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ನಾಟಾ ವನ್ನು ದಿನಾಂಕ:12–07–2008 ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಇಲಾಖಾ ಪರ ವಶಪಡಿಸಿಕೊಂಡು, ಅ.ಮೊ.ಸಂಖ್ಯೆ:26/08–09ನ್ನು ದಾಖಲಿಸಿ ವಾಹನ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಅಲ್ಲದೇ ಕಾನೂನು ರೀತ್ಯಾ ಪ್ರಚಾರ ಕಾರ್ಯ ಮುಗಿಸಿದ್ದು, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು

ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಜಪ್ತು ಮಾಡಿದ ವಾಹನ ಬಜಾಜ್ ಎಂ–80, ಕೆಎ–15–ಇ–2086ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ನಾರಾ 2=0.475ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:21–11–2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.1262 ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–32/08–09, ದಿನಾಂಕ:21ನೇ ನವೆಂಬರ್, 2009**

| | |
|---|---|
| **ಉಪಸ್ಥಿತರು :** | ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು :** | ವಲಯ ಅರಣ್ಯಾಧಿಕಾರಿ,<br>ಆನಂದಪುರಂ ವಲಯ, ಚೋರಡಿ. (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು:** | ಸಹಾಜಾನ್ |
| **ಭಾಧ್ಯತೆದಾರರು:** | ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ. |

**ಪ್ರಸ್ತಾವನೆ:**

ದಿನಾಂಕ:18–11–2008ರಂದು ಆನಂದಪುರಂ ವಲಯ, ಚೋರಡಿಯ ತುಪ್ಪೂರು ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಾಗರ ತಾಲ್ಲೂಕು ಆನಂದಪುರಂ ಹೋಬಳಿ ಗಿಳಾಲಗುಂಡಿ ಮೀಸಲು ಅರಣ್ಯದ ಸರ್ವೆ ನಂ: 4ರಲ್ಲಿ ಹೋಗುತ್ತಿರುವಾಗ ಒಂದು ವಾಹನ ಬರುತ್ತಿರುವುದನ್ನು ಪರಿಶೀಲಿಸಲು ಇಲಾಖಾ ವಾಹನದಿಂದ ಇಳಿದು ಹತ್ತಿರ ಹೋಗಿ ಬ್ಯಾಟರಿ ಬೆಳಕಿನಿಂದ ನೋಡಲು 3 ರಿಂದ 4 ಜನ ಅಸಾಮಿಗಳಿದ್ದು, ಇಳಿದು ಓಡಲು ಪ್ರಾರಂಭಿಸಿದಾಗ ಬೆನ್ನಟ್ಟಿದರೂ ಕೈಗೆ ಸಿಗದೆ ಪರಾರಿಯಾದರು. ಓಡಿಹೋದ ಅಸಾಮಿಗಳಲ್ಲಿ ಒಬ್ಬನನ್ನು ಸಿಬ್ಬಂದಿಯವರು ಗುರುತಿಸಿದ್ದು, ಅವನ ಹೆಸರು ಸಹಾಜಾನ್ ಬಿನ್ ಅಮೀರ್ ಸಾಬ್, ಚನ್ನಕೊಪ್ಪ ವಾಸಿ, ಅಂದಾಜು 38 ವರ್ಷ, ಸಾಗರ ತಾಲ್ಲೂಕು ಎಂಬುದಾಗಿರುತ್ತದೆ. ನಂತರ ವಾಹನವನ್ನು ಪರಿಶೀಲಿಸಲಾಗಿ ಅಶೋಕ್ ಲೈಲ್ಯಾಂಡ್ ಲಾರಿ ನಂ: ಕೆಎ–27–2669 ಛಾಸ್ಸಿಸ್ ನಂ: QUE-331066, ಇಂಜಿನ್ ನಂ: QUE-214573 ಆಗಿದ್ದು ವಾಹನದೊಳಗಡೆ ಬೀಟೆ ನಾಟಾ 9=2.033 ಎಂ3 ಇದ್ದು, ಈ ನಾಟಾಗಳ ಮೇಲೆ ಇಲಾಖಾ ಛಾಪಾದ ಗುರುತು ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24(ಇ), 62, 71(ಎ), 104 ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಆನಂದಪುರಂ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 55/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿನಾಂಕ:22–11–2008ರಂದು ಆದೇಶವಾಗಿದೆ.

ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಹಾವೇರಿ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–32/08–09 ದಿನಾಂಕ:12–11–2008ರಂದು ಪತ್ರ ಬರೆದು ಈ ವಾಹನದ

ಬಿ ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಹಾವೇರಿ ಇವರು ಅವರ ಪತ್ರ ಸಂಖ್ಯೆ:ಪ್ರಾಸಾಅ:ಹಾ:ನೊಂದಣಿ/08-09 ದಿನಾಂಕ:08-12-2008ರ ಪತ್ರದಲ್ಲಿ ಬಿ ಪ್ರತಿಯನ್ನು, ಸಿ.ಸಿ.ಯನ್ನು ದಾವಣಗೆರೆ ಪ್ರಾದೇಶಿಕ ಸಾರಿಗೆ ಕಛೇರಿಗೆ ದಿನಾಂಕ:04-09-1999ರಲ್ಲಿ ವರ್ಗಾಯಿಸಿದ ಬಗ್ಗೆ ತಿಳಿಸಿರುತ್ತಾರೆ. ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ದಾವಣಗೆರೆ ಇವರಿಗೆ ಈ ಕಛೇರಿ ಪತ್ರ ಸಮ ಸಂಖ್ಯೆ ದಿನಾಂಕ:20-12-2008ರಲ್ಲಿ ಬಿ ಪ್ರತಿಯನ್ನು ಒದಗಿಸಲು ಕೋರಿದಂತೆ ದಾವಣಗೆರೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಅವರ ಪತ್ರ ಸಂಖ್ಯೆ: ಪ್ರಾಸಾಪ್ರಾ:ದಾವ:ಬಿ.ವಹಿ/08-09 ದಿನಾಂಕ:26-12-2008ರಲ್ಲಿ ಈ ವಾಹನದ ಸಿ.ಸಿ.ಯನ್ನು ದಿನಾಂಕ:07-10-1999ರಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿತ್ರದುರ್ಗ ಇವರಿಗೆ ವರ್ಗಾಯಿಸಿರುವುದಾಗಿ ತಿಳಿಸಿರುತ್ತಾರೆ. ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿತ್ರದುರ್ಗ ಇವರಿಗೆ ಈ ನ್ಯಾಯಾಲಯದ ಪತ್ರ ಸಮ ಸಂಖ್ಯೆ ದಿನಾಂಕ:25-03-2009ರಲ್ಲಿ ಪತ್ರ ಬರೆದು ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಕೋರಿರುತ್ತದೆ. ಆದರೆ ಇಲ್ಲಿಯವರೆವಿಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿತ್ರದುರ್ಗ ಇವರು ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಆದ್ದರಿಂದ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ನಂತರ ಆರ್.ಸಿ. ಮಾಲಿಕರು ನ್ಯಾಯಾಲಯದ ಮೊರೆ ಹೋದಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿತ್ರದುರ್ಗ ರವರೇ ನೇರ ಜವಾಬ್ದಾರರಾಗುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿನಾಂಕ:02-12-2008ರಂದು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿನಾಂಕ:11-12-2008ರಂದು ರಾಜ್ಯಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:31-10-2009 ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ನಾಟಾವನ್ನು ದಿನಾಂಕ:18-11-2008ರಂದು ಅಕ್ರಮವಾಗಿ ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ ಇವರು ಇಲಾಖಾ ಪರ ವಶಪಡಿಸಿಕೊಂಡು, ಅ.ಮೊ.ಸಂಖ್ಯೆ: 55/08-09ನ್ನು ದಾಖಲಿಸಿ ವಾಹನ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಅಲ್ಲದೇ ಕಾನೂನು ರೀತ್ಯಾ ಪ್ರಚಾರ ಕಾರ್ಯ ಮುಗಿಸಿದ್ದು, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಜಪ್ತು ಮಾಡಿದ ವಾಹನ ಅಶೋಕ್ ಲೈಲ್ಯಾಂಡ್ ಲಾರಿ ಕೆಎ-27-2669 (ಛಾಸ್ಸಿಸ್ ನಂ: QUE-331066, ಇಂಜಿನ್ ನಂ: QUE-214573) ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 9=2.033ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:21-11-2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.1263

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–01/08–09, ದಿನಾಂಕ:21ನೇ ನವೆಂಬರ್, 2009**

| | |
|---|---|
| **ಉಪಸ್ಥಿತರು:** | ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು:** | ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು:** | ಪತ್ತೆಯಾಗಿರುವುದಿಲ್ಲ. |
| **ಭಾಧ್ಯತೆದಾರರು:** | ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ. |

**ಪ್ರಸ್ತಾವನೆ:**

ದಿನಾಂಕ:03–04–2008ರಂದು ಆನಂದಪುರಂ ವಲಯ, ಚೋರಡಿಯ ವಲಯ ಅರಣ್ಯಾಧಿಕಾರಿಗೆ ಇರುವಕ್ಕಿ ಸಾಗುವಾನಿ ನೆಡುತೋಪಿನಿಂದ ಬೀಟೆ ಮರಗಳನ್ನು ಕಳ್ಳ ಸಾಗಾಣಿಕೆ ಮಾಡುತ್ತಿದ್ದಾರೆಂದು ಬಂದ ಖಚಿತ ವರ್ತಮಾನದ ಮೇರೆಗೆ ಸಾಗರ ತಾಲ್ಲೂಕು ಆನಂದಪುರಂ ಹೋಬಳಿ ಇರುವಕ್ಕಿ ಗ್ರಾಮದ ಸ.ನಂ: 13ರ 2005–06ನೇ ಸಾಲಿನ ಸಾಗುವಾನಿ ನೆಡುತೋಪಿಗೆ ಇಲಾಖಾ ವಾಹನದಲ್ಲಿ ಹೋಗಿ ಪರಿಶೀಲಿಸಲಾಗಿ ಒಂದು ಕ್ಯಾಂಟರ್‌ಗೆ ನಾಟಾಗಳನ್ನು ಲೋಡ್ ಮಾಡುತ್ತಿರುವುದನ್ನು ನೋಡಿ ಬ್ಯಾಟರಿ ಬೆಳಕನ್ನು ಹಿಡಿದಾಗ, ಬ್ಯಾಟರಿ ಬೆಳಕನ್ನು ನೋಡಿ ಅಸಾಮಿಗಳು ಕತ್ತಲೆಯಲ್ಲಿ ಓಡಿ ಪರಾರಿಯಾಗಿರುತ್ತಾರೆ. ಓಡಿಹೋದವರನ್ನು ಅರಣ್ಯ ರಕ್ಷಕರು ಮತ್ತು ವನಪಾಲಕರು ಗುರುತಿಸಿರುತ್ತಾರೆ. 1ನೇಯವನು ಹರೀಶ್ ಯಾನೆ ವೀರಭದ್ರ ಬಿನ್ ಪರಸಪ್ಪ ಗೌಡ, ಆಲಿಯಾಸ್ ಮೀಸೆ ಗೌಡ, ಅಂದಾಜು 25 ವರ್ಷ, ಮೇಲ್‌ಸಸಿ ವಾಸಿ, ಸುಳಗೋಡು ಗ್ರಾಮ, ಆನಂದಪುರಂ, ಸಾಗರ ತಾಲ್ಲೂಕು, 2ನೇಯವನು ಎಸ್. ಬಸವರಾಜು ಬಿನ್ ಸಿದ್ದನಮಾರಪ್ಪ, ಅಂದಾಜು 35 ವರ್ಷ, ಹಿರೂರು, ಸೊರಬ ತಾಲ್ಲೂಕು. ನಂತರ ವಾಹನವನ್ನು ಪರಿಶೀಲಿಸಲಾಗಿ ಕ್ಯಾಂಟರ್ ಕೆಎ–15–1109 ಆಗಿದ್ದು, ಇಂಜಿನ್ ನಂ: 140320853, ಛಾಸ್ಸಿಸ್ ನಂ: 4-EC-40328403 ಆಗಿದ್ದು, ವಾಹನದೊಳಗಿದ್ದ ಬೀಟೆ ನಾಟಾಗಳನ್ನು ಎಣಿಸಿದ್ದು, 10 ಸಂಖ್ಯೆಯಿದ್ದು, ನಂಬರ್ ಕೊಟ್ಟು, ನಾಟಾಗಳನ್ನು ಅಳತೆ ಮಾಡಿ 2.210ಎಂ3 ಇದ್ದು, ಈ ನಾಟಾಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ. ರಹದಾರಿ ಬಗ್ಗೆ ವಿಚಾರಿಸಲು ಅಸಾಮಿಗಳು ಓಡಿ ಹೋಗಿರುವುದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 127(ಎ), 144, 165ರ ಪ್ರಕಾರ ಚೋರಡಿ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 01/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿನಾಂಕ:05–04–2008ರಂದು ಆದೇಶವಾಗಿದೆ.

ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–01/08–09 ದಿನಾಂಕ:10–04–2008 ಮತ್ತು 12–06–2008ರಂದು ಪತ್ರ ಬರೆದು ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಸಾರಿಗೆ ಅಧಿಕಾರಿ, ಸಾಗರ ಇವರ ಕಛೇರಿ ಪತ್ರ ಸಂಖ್ಯೆ: ಸಾಪ್ರಾಸಾಅ:ಸಾಗರ:ಬಿಎಕ್ಸ್/08–09 ದಿನಾಂಕ:21–06–2008ರಲ್ಲಿ ಸದರಿ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಬಿ ಪ್ರತಿಯಲ್ಲಿ ನಮೂದಿಸಿದ ವಿಳಾಸದಂತೆ ಶ್ರೀ ಬಸವರಾಜ್ ಬಿನ್ ಸಿದ್ದಣ್ಣ ಮಾರಪ್ಪ, ಹರೂರು, ಸೊರಬ ತಾಲ್ಲೂಕು ಇವರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು 30 ದಿನಗಳ ಕಾಲಾವಕಾಶ ನೀಡಿ ಈ ವಾಹನದ ಎಲ್ಲಾ ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಜಾರಿ ಮಾಡಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ತಿಳಿಸಲಾಗಿತ್ತು. ಆದರೆ ಇಲ್ಲಿಯವರೆಗೂ ಆರ್.ಸಿ. ಮಾಲೀಕರು ಈ ನ್ಯಾಯಾಲಯಕ್ಕೆ ಈ ವಾಹನದ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿನಾಂಕ:10–04–2008ರಂದು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿನಾಂಕ:17–04–2008ರಂದು ರಾಜ್ಯಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ

ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:31–10–2009 ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ನಾಟಾವನ್ನು ದಿನಾಂಕ:03–04–2008ರಂದು ಸಾಗಿಸಿದ ಬಗ್ಗೆ ಸದರಿ ವಾಹನವನ್ನು ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಇಲಾಖಾ ಪರ ವಶಪಡಿಸಿಕೊಂಡು, ಅ.ಮೊ.ಸಂಖ್ಯೆ:01/08–09ನ್ನು ದಾಖಲಿಸಿ ವಾಹನ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನದ ಆರ್.ಸಿ. ಮಾಲೀಕರಿಗೆ ನೋಟಿಸ್ ನೀಡಲಾಗಿದ್ದು, 30 ದಿನ ಕಳೆದರೂ ಡಿಫೆನ್ಸ್ ಕಡೆಯವರು ಯಾರೂ ಈ ಪ್ರಕರಣದಲ್ಲಿ ನ್ಯಾಯಾಲಯಕ್ಕೆ ಹಾಜರಾಗಿ ವಾಹನ ಬಿಡಿಸಿಕೊಳ್ಳಲು ಅರ್ಜಿ ಸಲ್ಲಿಸಿರುವುದಿಲ್ಲ. ಅಲ್ಲದೇ ಕಾನೂನು ರೀತ್ಯಾ ಪ್ರಚಾರ ಕಾರ್ಯ ಮುಗಿಸಿದ್ದು, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಪನಿಯಮ 71(ಬಿ)(1)ರ ಪ್ರಕಾರ ಆರ್.ಸಿ. ಮಾಲೀಕರಿಗೆ ನೋಟಿಸ್ ಜಾರಿ ಮಾಡಿದ್ದು ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಜಪ್ತು ಮಾಡಿದ ವಾಹನ ಕ್ಯಾಂಟರ್ ಕೆಎ–15–1109 (ಇಂಜಿನ್ ನಂ: 140320853, ಛಾಸ್ಸಿಸ್ ನಂ:4-EC-40328403)ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 10=2.210ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:21–11–2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.1254

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–14/08–09, ದಿನಾಂಕ:21ನೇ ನವೆಂಬರ್, 2009**

**ಉಪಸ್ಥಿತರು:** ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು:** ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ
(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು:** ಪತ್ತೆಯಾಗಿರುವುದಿಲ್ಲ.

**ಭಾಧ್ಯತೆದಾರರು:** ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:30–7–2008ರಂದು ಆನಂದಪುರಂ ವಲಯ, ಚೋರಡಿಯ ಗೌತಮಪುರ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಸಾಗರ ತಾಲ್ಲೂಕು ಆನಂದಪುರಂ ಹೋಬಳಿ ದೋಣಂದೂರು ಗ್ರಾಮದ ಸ.ನಂ: 6ರ ದೋಣಂದೂರು ಗೌತಮ್‌ಪುರ ರಸ್ತೆಯಲ್ಲಿ ಗಸ್ತು ಮಾಡುತ್ತಿರುವಾಗ ಒಂದು ಬಿಳಿ ಬಣ್ಣದ ಕೆಎ–01–ಎನ್–4390 ನಂಬರಿನ ಮಾರುತಿ ವ್ಯಾನ್ ನಿಂತಿರುವುದನ್ನು ಕಂಡು ಅನುಮಾನದಿಂದ ವಾಹನವನ್ನು ಪರಿಶೀಲಿಸಿದಾಗ ವಾಹನದಲ್ಲಿ ಅಸಾಮಿಗಳು ಇರಲಿಲ್ಲ. ವಾಹನದೊಳಗೆ 3 ಬೀಟೆ ನಾಟಾ ತುಂಬಿದ್ದು, ಸದರಿ ನಾಟಾಗಳನ್ನು ಗರಗಸದಿಂದ ಕೊಯ್ತ ಮಾಡಿರುವುದಾಗಿದ್ದು, ಈ ನಾಟಾಗಳ ಮೇಲೆ ಇಲಾಖಾ ಛಾಪಾದ ಗುರುತು ಇರಲಿಲ್ಲ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ

ಮತ್ತು ಬೀಟೆ ನಾಟಾ 3=0.430ಎಂ3ನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 33, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಆನಂದಪುರಂ ವಲಯ, ಚೋರಡಿ ಕಛೇರಿ ಅರಣ್ಯ ಮೊಕದ್ದಮೆ ಸಂಖ್ಯೆ: 31/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿನಾಂಕ:22–11–2008ರಂದು ಆದೇಶವಾಗಿದೆ.

ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕೋರಮಂಗಲ (ಕೇಂದ್ರ) ಬೆಂಗಳೂರು 560034 ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ:ಬಿ3:ಅಮೊ:ವಾಹನ–14/08–09 ದಿನಾಂಕ:08–09–2008, 30–10–2008, 25–03–2009ರಂದು ಪತ್ರ ಬರೆದು ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಆದರೆ ಇಲ್ಲಿಯವರೆವಿಗೂ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಅಲ್ಲದೇ ಈ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಂಡಾಗ ಆರ್.ಸಿ. ಮಾಲಿಕರು ನ್ಯಾಯಾಲಯದ ಮೊರೆ ಹೋದಲ್ಲಿ ಅದಕ್ಕೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಕೋರಮಂಗಲ(ಕೇಂದ್ರ), ಬೆಂಗಳೂರು ರವರೇ ನೇರ ಹೊಣೆಗಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿನಾಂಕ:08–09–2008ರಂದು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿನಾಂಕ:18–09–2008ರಂದು ರಾಜ್ಯಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:31–10–2009 ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ದಿನಾಂಕ:30–07–2008ರಂದು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಇಲಾಖಾ ಪರ ವಶಪಡಿಸಿಕೊಂಡು, ಅ.ಮೊ.ಸಂಖ್ಯೆ:31/08–09ನ್ನು ದಾಖಲಿಸಿ ವಾಹನ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಅಲ್ಲದೇ ಕಾನೂನು ರೀತ್ಯಾ ಪ್ರಚಾರ ಕಾರ್ಯ ಮುಗಿಸಿದ್ದು, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಜಪ್ತು ಮಾಡಿದ ವಾಹನ ಬಿಳಿಯ ಬಣ್ಣದ ಮಾರುತಿ ವ್ಯಾನ್ ಕೆಎ–01–ಎನ್–4396ನ್ನು (ಛಾಸ್ಸಿಸ್ ನಂ: ST-91-IN-122922, ಇಂಜಿನ್ ನಂ: F-8-B-IN-1197740) ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 3=0.430 ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:21–11–2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.1255

**ಉಪನಿರ್ದೇಶಕರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ**

**ಸಂಖ್ಯೆ:ಇ2/ಪ್ರಾಶಾಶಿ/ಅಗೈರ/ಬಿಎಂಎಂ/23/2009-10, ದಿನಾಂಕ:24ನೇ ನವೆಂಬರ್, 2009**

**ಅಂತಿಮವಾಗಿ ಎರಡನೇಯ ನೋಟೀಸು**

**ವಿಷಯ:** ಶಾಲಾ ಕರ್ತವ್ಯಕ್ಕೆ ಅನಧಿಕೃತ ಗೈರು ಉಳಿದಿರುವ ಕುರಿತು.

**ಉಲ್ಲೇಖ:**1) ಕ್ಷೇತ್ರ ಶಿಕ್ಷಣಾಧಿಕಾರಿಗಳು ಕುಂದಗೋಳ ಇವರ ಪತ್ರ ಸಂಖ್ಯೆ:ಎ1:ಪ್ರಾಶಾಶಿ:ದೂರು/01/ಬಿಎಂಎಂ/2007-08: ದಿನಾಂಕ:28.07.2009.

2) ಈ ಕಛೇರಿ ಪತ್ರ ಸಮಸಂಖ್ಯೆ ದಿನಾಂಕ:09.09.2009.

ಮೇಲ್ಕಾಣಿಸಿದ ವಿಷಯ ಹಾಗೂ ಉಲ್ಲೇಖದನ್ವಯ ಶ್ರೀ ಬಿ.ಎಂ. ಮುಲ್ಲಾ, ಸಹ ಶಿಕ್ಷಕರು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಕೊಡ್ಲಿವಾಡ ತಾ:ಕುಂದಗೋಳ, ಜಿ:ಧಾರವಾಡ ಆದ ನೀವು ದಿನಾಂಕ:09.04.2007 ರಿಂದ ಇಲ್ಲಿಯವರೆಗೂ ಶಾಲಾ ಕರ್ತವ್ಯಕ್ಕೆ ಅನಧಿಕೃತ ಗೈರು ಉಳಿದಿದ್ದೀರಿ. ಈ ಕುರಿತು ಕ್ಷೇತ್ರ ಶಿಕ್ಷಣಾಧಿಕಾರಿಗಳು ನಿಮಗೆ ದಿನಾಂಕ:14.11.2007, ದಿನಾಂಕ:31.12.2007, ಮತ್ತು ದಿನಾಂಕ:16.12.2008ರ ಪತ್ರದಂತೆ ಶಾಲಾ ಕರ್ತವ್ಯಕ್ಕೆ ಹಾಜರಾಗಲು ಸೂಚನೆ ನೀಡಿ ನೋಟೀಸ್ ಜಾರಿ ಮಾಡಿದ್ದರು, ಹಾಗೂ ಅಂತಿಮವಾಗಿ ದಿನಾಂಕ:03.07.2009ರಂದು ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಣೆ ನೀಡಿ ಕರ್ತವ್ಯಕ್ಕೆ ಹಾಜರಾಗಲು ಸೂಚಿಸಿದ್ದರು. ಆದರೂ ನೀವು ಈ ವರೆಗೂ ಶಾಲಾ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಆ ನಂತರ ಈ ಕಛೇರಿಯಿಂದ ಉಲ್ಲೇಖ 1ರಂತೆ ಅಂತಿಮ ನೋಟೀಸು ಒಂದು ಬಾರಿ ಕಳುಹಿಸಿದರೂ ನೀವು ಸೇವೆಗೆ ಹಾಜರಾಗಿರುವುದಿಲ್ಲ. ಇದರಿಂದಾಗಿ ನೀವು ಸೇವೆಯಲ್ಲಿ ನಿಷ್ಕಾಳಜಿ, ನಿರ್ಲಕ್ಷತನ ಹಾಗೂ ಅವಿಧೇಯತೆ ತೋರಿರುವುದು ಕಂಡುಬರುತ್ತದೆ. ಇದರಿಂದಾಗಿ ನೀವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 108ನ್ನು ಉಲ್ಲಂಘಿಸಿದ್ದೀರಿ ಎಂದು ಭಾವಿಸಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 8ರ ಉಪಖಂಡ (VII) ರ ಅಡಿ ಸೇವೆಗೆ ಅನಧಿಕೃತ ಗೈರು ಉಳಿದ ದಿನದಿಂದಲೇ ಅಂದರೆ ದಿನಾಂಕ:09.04.2007 ರಿಂದ ಜಾರಿಗೆ ಬರುವಂತೆ ನಿಮ್ಮನ್ನು ಸೇವೆಯಿಂದ ವಜಾಗೊಳಿಸಲು ಉಲ್ಲೇಖ 1 ರ ಪತ್ರದಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಅನುಮತಿ ಕೋರಿದ್ದಾರೆ.

ಈ ಹಿನ್ನೆಲೆಯಲ್ಲಿ ನಿಮಗೆ ಈ ಮೂಲಕ ಅಂತಿಮವಾಗಿ ತಿಳಿಸುವುದೇನೆಂದರೆ ಈ ಅಂತಿಮ ನೋಟೀಸ್ ತಲುಪಿದ 15 ದಿನಗಳ ಒಳಗಾಗಿ ನೀವು ಕರ್ತವ್ಯಕ್ಕೆ ಹಾಜರಾಗಲು ತಿಳಿಸಲಾಗಿದೆ. ಆದಾಗ್ಯೂ ನೀವು ಸೇವೆಗೆ ಹಾಜರಾಗದಿದ್ದಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 14 (2)ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿಮ್ಮನ್ನು ನಿಯಮಾನುಸಾರ ಸೇವೆಯಿಂದ ವಜಾ ಮಾಡಲು ಕ್ರಮ ವಹಿಸಲಾಗುವುದು ಎಂದು ಈ ಮೂಲಕ ಸೂಚಿಸಲಾಗಿದೆ.

ಉಪನಿರ್ದೇಶಕರು (ಆಡಳಿತ),

ಪಿ.ಆರ್.1251 ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ.

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನೀಯರರು, ರಾಜ್ಯ ಹೆದ್ದಾರಿ ಪ್ರಾಧಿಕಾರ ಅಧಿಕಾರಿಯವರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ಶಿರಸಿ (ಉತ್ತರ ಕನ್ನಡ ಜಿಲ್ಲೆ)**

**ಕಛೇರಿ ಆದೇಶ ಸಂಖ್ಯೆ:10/2009-10, ದಿನಾಂಕ:10ನೇ ನವೆಂಬರ್, 2009**

**ವಿಷಯ:** ಶ್ರೀ ರುದ್ರಪ್ಪ ರಾಮಣ್ಣ ಭೋವಿವಡ್ಡರ, ಗ್ಯಾಂಗ್‌ಮನ್ (ಸೂಪರ್‌ನ್ಯೂಮರಿ ಹುದ್ದೆ) ಇವರ ಅನಧಿಕೃತ ಗೈರು ಹಾಜರಿ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿ.ಆ.ಸು.ಇ.-18: ಸೇ.ಇ.ವಿ:2001, ದಿನಾಂಕ:14.09.2001.

2) ಸ.ಕಾ.ನಿ.ಇಂ. ಲೋ.ಬಂ.ಮತ್ತು ಒ.ಜ.ಇ. ಉಪ-ವಿಭಾಗ, ಯಲ್ಲಾಪುರ ಇವರ ಪತ್ರ ಸಂಖ್ಯೆ:ಲೋ.ಇ./ಸಿ/ಶಿಸ್ತು ಕ್ರಮ/02-03/276 ದಿನಾಂಕ:22.07.2002.

3) ಸ.ಕಾ.ನಿ.ಇಂ. ಲೋ.ಬಂ.ಮತ್ತು ಒ.ಜ.ಇ. ಉಪ-ವಿಭಾಗ, ಯಲ್ಲಾಪುರ ಇವರ ಪತ್ರ ಸಂಖ್ಯೆ: ಲೋ.ಇ/ಸಿ/ಶಿಸ್ತು ಕ್ರಮ/02-03/415 ದಿನಾಂಕ:07.09.2002.

4) ಸ.ಕಾನಿ.ಇಂ/ಲೋ.ಬಂ. ಮತ್ತು ಒ.ಜ.ಇ. ಉಪ-ವಿಭಾಗ, ಯಲ್ಲಾಪುರ ಇವರ ಪತ್ರ ಸಂಖ್ಯೆ:ಲೋ.ಇ/ಸಿ/ಶಿಸ್ತು ಕ್ರಮ/02-03/550 ದಿನಾಂಕ:12.11.2002.

5) ಸ.ಕಾನಿ.ಇಂ/ಲೋ.ಬಂ. ಮತ್ತು ಒ.ಜ.ಇ. ಉಪ-ವಿಭಾಗ, ಯಲ್ಲಾಪುರ ಇವರ ಪತ್ರ ಸಂಖ್ಯೆ:ಲೋ.ಇ./ಸಿ/ಶಿಸ್ತು ಕ್ರಮ/02-03/817 ದಿನಾಂಕ:20.03.2003.

6) ಇಲಾಖಾ ವಿಚಾರಣಾಧಿಕಾರಿ ಇವರ ನೋಟೀಸ್ ಸಂಖ್ಯೆ: ಶಿ.ಕ್ರ/03-04/37 ದಿನಾಂಕ:10.04.2003.

7) ಇಲಾಖಾ ವಿಚಾರಣಾಧಿಕಾರಿ ಇವರ ನೋಟೀಸ್ ಸಂಖ್ಯೆ: ಶಿ.ಕ್ರ/03–04/150 ದಿನಾಂಕ:12.05.2003.
8) ಶ್ರೀ ಎ.ಆರ್. ಕುಲಕರ್ಣಿ ಸಹಾಯಕ ಇಂಜಿನೀಯರ್, ವಿಚಾರಣಾಧಿಕಾರಿ ಇವರ ಅಂತಿಮ ವಿಚಾರಣಾ ವರದಿ ದಿನಾಂಕ:24.06.2003.
9) ಸ.ಕಾ.ನಿ.ಇಂ/ಲೋ.ಬಂ. ಮತ್ತು ಒ.ಜ.ಇ. ಉಪ–ವಿಭಾಗ, ಯಲ್ಲಾಪುರ ಇವರ ಪತ್ರ ಸಂಖ್ಯೆ:ಲೋ.ಇ./ಸಿ/ಶಿಸ್ತುಕ್ರಮ/02–03/220 ದಿನಾಂಕ:04.07.2003.
10) ಸ.ಕಾನಿ.ಇಂ/ಲೋ.ಬಂ. ಮತ್ತು ಒ.ಜ.ಇ. ಉಪ–ವಿಭಾಗ, ಯಲ್ಲಾಪುರ ಇವರ ಪತ್ರ ಸಂಖ್ಯೆ:ಲೋ.ಇ./ಸಿ/ಶಿಸ್ತುಕ್ರಮ/02–03/736 ದಿನಾಂಕ:27.03.2004.
11) ಪತ್ರಿಕಾ ಪ್ರಕಟಣೆ ದಿನಾಂಕ:08.02.2006.
12) ಶ್ರೀ ರುದ್ರಪ್ಪ ರಾಮಣ್ಣ ಭೋವಿವಡ್ಡರ ಇವರ ಮನವಿ ದಿನಾಂಕ:17.02.2006.
13) ಸ.ಕಾ.ನಿ.ಇಂ/ಲೋ.ಬಂ. ಮತ್ತು ಒ.ಜ.ಇ. ಉಪ–ವಿಭಾಗ, ಯಲ್ಲಾಪುರ ಇವರ ಪತ್ರ ಸಂಖ್ಯೆ:618 ದಿನಾಂಕ:28.02.2006.
14) ಸ.ಕಾನಿ.ಇಂ/ಲೋ.ಬಂ. ಮತ್ತು ಒ.ಜ.ಇ. ಉಪ–ವಿಭಾಗ, ಯಲ್ಲಾಪುರ ಇವರ ಪತ್ರ ಸಂಖ್ಯೆ:ಸಿ–2/ಗ್ಯಾಂಗ್‌ಮನ್/ಗೈಹಾ ಪ್ರಕರಣ/06–07/114 ದಿನಾಂಕ:25.05.2006.
15) ಸ.ಕಾನಿ.ಇಂ/ಲೋ.ಬಂ. ಮತ್ತು ಒ.ಜ.ಇ. ಉಪ–ವಿಭಾಗ, ಯಲ್ಲಾಪುರ ಇವರ ಪತ್ರ ಸಂಖ್ಯೆ:ಸಿ–3/ಗ್ಯಾಂಗ್‌ಮನ್/ ಅಗೈಹಾ ಪ್ರಕರಣ/08–09/544 ದಿನಾಂಕ:01.01.2009.
16) ಮುಖ್ಯ ಇಂಜಿನೀಯರ, ಸಂಪರ್ಕ ಮತ್ತು ಕಟ್ಟಡ (ಉ), ಧಾರವಾಡ ಇವರ ಪತ್ರಸಂಖ್ಯೆ: ಸಿ.ಬಿ.ಎನ್/ಸಿ–9(ಎ)/ ಗೈರು ಹಾಜರ/ವಿ.ವ–30/09–10/5220 ದಿನಾಂಕ:31.07.2009.
17) ಅಧೀಕ್ಷಕ ಇಂಜಿನೀಯರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಧಾರವಾಡ ವೃತ್ತ, ಧಾರವಾಡ ಇವರ ಹಿಂಬರಹ ಪತ್ರ ಸಂಖ್ಯೆ: ಅಇಂಧಾ/ಸಿ–4/09–10/2797 ದಿನಾಂಕ:11.08.2009.

**ಪ್ರಸ್ತಾವನೆ:**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ–ವಿಭಾಗ, ಯಲ್ಲಾಪುರ ಕಛೇರಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ರುದ್ರಪ್ಪ ರಾಮಣ್ಣ ಭೋವಿವಡ್ಡರ, ಗ್ಯಾಂಗ್‌ಮನ್ (ಸೂಪರ್‌ನ್ಯೂಮರಿ ಹುದ್ದೆ) ಇವರು ದಿನಾಂಕ:08.07.2002 ರಿಂದ ಕೆಲಸಕ್ಕೆ ಅನಧೀಕೃತವಾಗಿ ಗೈರು ಹಾಜರಾಗಿರುತ್ತಾರೆ. ಈ ಬಗ್ಗೆ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಯಲ್ಲಾಪುರ ಇವರು ಉಲ್ಲೇಖ (2) ಮತ್ತು (3)ರ ಪತ್ರದಲ್ಲಿ ಸದರೀ ನೌಕರರ ವಿಳಾಸಕ್ಕೆ ಕಾರಣ ಕೇಳುವ ನೋಟೀಸ್‌ನ್ನು ನೊಂದಾಯಿತ ಅಂಚೆ ಮೂಲಕ ನೀಡಿದ್ದು, ಸದರಿ ನೋಟೀಸ್‌ಗಳನ್ನು ಶ್ರೀ ರುದ್ರಪ್ಪ ರಾಮಣ್ಣ ಭೋವಿವಡ್ಡರ, ಗ್ಯಾಂಗ್‌ಮನ್ (ಸೂಪರ್‌ನ್ಯೂಮರಿ ಹುದ್ದೆ) ಇವರು ಪಡೆದುಕೊಂಡಿದ್ದರೂ ಸಹ ಕೆಲಸಕ್ಕೆ ಹಾಜರಾಗದೇ ಯಾವುದೇ ಪ್ರತಿಕ್ರಿಯೆಯನ್ನು ನೀಡದೇ ಗೈರು ಹಾಜರಿಯಲ್ಲಿ ಇದ್ದುದರಿಂದ ಉಲ್ಲೇಖ (4)ರ ಪತ್ರದಲ್ಲಿ ಅಂತಿಮ ಕಾರಣ ಕೇಳುವ ನೋಟೀಸ್‌ನ್ನು ಜಾರಿಗೊಳಿಸಿರುತ್ತಾರೆ. ಅಂತಿಮ ನೋಟೀಸ್‌ನಲ್ಲಿ ಪತ್ರ ತಲುಪಿದ 07 ದಿನಗಳ ಒಳಗೆ ಕಛೇರಿಗೆ ಖುದ್ದಾಗಿ ದಾಖಲೆಗಳೊಂದಿಗೆ ಹಾಜರಾಗಿ ಹೇಳಿಕೆ ನೀಡುವಂತೆ ಸೂಚಿಸಲಾಗಿದ್ದು, ತಪ್ಪಿದ್ದಲ್ಲಿ ಕೆ.ಸಿ.ಎಸ್.ಆರ್. ಮತ್ತು ಸಿ.ಸಿ.ಎ. ನಿಯಮಾವಳಿಗಳ ಅನ್ವಯ ಇಲಾಖಾ ವಿಚಾರಣೆ ನಡೆಸಿ, ಸೇವೆಯಿಂದ ವಜಾಗೊಳಿಸುವುದಾಗಿ ಎಚ್ಚರಿಕೆ ನೀಡಿರುತ್ತಾರೆ.

ಉಲ್ಲೇಖ (5)ರ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಯಲ್ಲಾಪುರ ಉಪ–ವಿಭಾಗ ಇವರ ಕಛೇರಿ ಆದೇಶದ ಪ್ರಕಾರ ಸದರೀ ನೌಕರರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಶ್ರೀ ಎ.ಆರ್. ಕುಲಕರ್ಣಿ, ಸಹಾಯಕ ಇಂಜಿನೀಯರ್ ಯಲ್ಲಾಪುರ ಉಪ–ವಿಭಾಗ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಉಲ್ಲೇಖ (6) ಮತ್ತು (7)ರ ಪತ್ರದಲ್ಲಿ ವಿಚಾರಣಾಧಿಕಾರಿಗಳು ಸದರೀ ನೌಕರರಿಗೆ ನೋಟೀಸ್‌ನ್ನು ಜಾರಿಗೊಳಿಸಿ ಸದರೀ ನೌಕರರ ವಿರುದ್ಧ ಆರೋಪ ಪಟ್ಟಿಯನ್ನು ತಯಾರಿಸಿ ನೌಕರರಿಗೆ ನೀಡಿ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಹಾಗೂ ವೈಯಕ್ತಿಕವಾಗಿ ಹಾಜರಾಗಿ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಉಲ್ಲೇಖ (8)ರ ವಿಚಾರಣಾಧಿಕಾರಿಯವರ ಅಂತಿಮ ವರದಿ ಪ್ರಕಾರ ಸದರೀ ನೌಕರರು ದಿನಾಂಕ:22.04.2003 ರಂದು ವಿಚಾರಣಾ ಪ್ರಾಧಿಕಾರದ ಮುಂದೆ ಖುದ್ದಾಗಿ ಹಾಜರಾಗಿ ಅವರ ಆರೋಗ್ಯವು ಸರಿ ಇಲ್ಲದೇ, ವೈದ್ಯರಿಂದ ಚಿಕಿತ್ಸೆ ಪಡೆಯುತ್ತಿದ್ದುದರಿಂದ, ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಎಂದು ತಿಳಿಸಿದ್ದು, ಈಗ ಅವರ ಆರೋಗ್ಯ ಸುಧಾರಿಸಿದ್ದು, 7 ದಿನಗಳೊಳಗಾಗಿ ಕರ್ತವ್ಯಕ್ಕೆ ಹಾಜರಾಗಿರುವುದಾಗಿ ತಿಳಿಸಿರುತ್ತಾರೆ. ತದನಂತರ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಹಾಗೂ ಯಾವುದೇ ಉತ್ತರವನ್ನು ನೀಡದೇ ಇರುವುದರಿಂದ ಸದರೀ ನೌಕರರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಆಸಕ್ತಿ ಇಲ್ಲದೇ ಇರುವುದು ಕಂಡುಬಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 108ರ ಹಾಗೂ

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ಮತ್ತು ಮೇಲ್ಮನವಿ) ನಿಯಮ 1957 ರ ನಿಯಮ 14 ಹಾಗೂ 8(7)ರ ಪ್ರಕಾರ ಸದರೀ ನೌಕರರನ್ನು ಮುಂದಿನ ನಿಯೋಜನೆಗೆ ಅನರ್ಹತೆಯಾಗದ ಹಾಗೆ ಸೇವೆಯಿಂದ ತೆಗೆದು ಹಾಕುವ ಕುರಿತು ಏಕಪಕ್ಷೀಯ ನಿರ್ಣಯ ತೆಗೆದುಕೊಳ್ಳುವುದು ಅನಿವಾರ್ಯ ಎಂದು ಭಾವಿಸಿ, ಸದರೀ ಗೈರು ಹಾಜರಾಗಿರುವ ನೌಕರರನ್ನು ಮುಂದಿನ ಸೇವೆಗೆ ಅನರ್ಹತೆಯಾಗದ ಹಾಗೆ ಸರ್ಕಾರಿ ಸೇವೆಯಿಂದ ತೆಗೆದುಹಾಕುವುದೊಂದೇ ಮಾರ್ಗವಿರುವುದಾಗಿ ವರದಿ ಸಲ್ಲಿಸಿರುತ್ತಾರೆ.

ಈ ಬಗ್ಗೆ ವರದಿಯನ್ನು ಉಲ್ಲೇಖ (9) ಮತ್ತು (10)ರ ಪತ್ರದಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಯಲ್ಲಾಪುರ ಇವರು ವಿಚಾರಣಾಧಿಕಾರಿಯವರ ವರದಿ ತೃಪ್ತಿಕರವಾಗಿದ್ದು, ಸದರಿಯವರನ್ನು ಸೇವೆಯಿಂದ ತೆಗೆದು ಹಾಕಲು ಕ್ರಮಕೈಗೊಳ್ಳುವಂತೆ ಕೋರಿ ಕಾರ್ಯನಿರ್ವಾಹಕ ಇಂಜಿನೀಯರ್, ಲೋಕೋಪಯೋಗಿ ಇಲಾಖೆ ಕಾರವಾರ ವಿಭಾಗ ಇವರಿಗೆ ವರದಿಯನ್ನು ಸಲ್ಲಿಸಿರುತ್ತಾರೆ. ಅದರಂತೆ ಕಾರ್ಯನಿರ್ವಾಹಕ ಇಂಜಿನೀಯರ್, ಲೋಕೋಪಯೋಗಿ ಇಲಾಖೆ ಕಾರವಾರ ವಿಭಾಗ ಇವರು ಪತ್ರಿಕಾ ಪ್ರಕಟಣೆಯನ್ನು ನೀಡಿದ್ದು, ಉಲ್ಲೇಖ (11)ರಲ್ಲಿ ಪತ್ರಿಕೆ ಮುಖಾಂತರ ಸದರೀ ನೌಕರರನ್ನು ಇಲಾಖಾ ವಿಚಾರಣೆ ಸಂದರ್ಭದಲ್ಲಿ ಏಕ ಪಕ್ಷೀಯವಾಗಿ ಸೇವೆಯಿಂದ ವಜಾ ಮಾಡಲು ಶಿಫಾರಸ್ಸು ಮಾಡಿರುವುದರಿಂದ ಮಾನವೀಯತೆ ದೃಷ್ಟಿಯಿಂದ ಪತ್ರಿಕೆಯಲ್ಲಿ ಪ್ರಕಟಣೆ ಪ್ರಕಟಗೊಂಡ 15 ದಿನದೊಳಗೆ ಉಪ–ವಿಭಾಗಕ್ಕೆ ಹಾಜರಾಗಿ ಅವರ ಹೇಳಿಕೆ ನೀಡಲು ಅವಕಾಶ ನೀಡಿದ್ದು, ತಪ್ಪಿದ್ದಲ್ಲಿ ಸೇವೆಯಿಂದ ವಜಾ ಮಾಡಲು ಕ್ರಮಕೈಗೊಳ್ಳುವುದಾಗಿ ಎಚ್ಚರಿಕೆಯನ್ನು ನೀಡಲಾಗಿತ್ತು.

ತದ ನಂತರ ಉಲ್ಲೇಖ (12)ರಲ್ಲಿ ಶ್ರೀ ರುದ್ರಪ್ಪ ರಾಮಣ್ಣ ಭೋವಿವಡ್ಡರ, ಗ್ಯಾಂಗ್‌ಮನ್ (ಸೂಪರ್‌ನ್ಯೂಮರಿ ಹುದ್ದೆ) ಇವರು ದಿನಾಂಕ:17.02.2006 ರಂದು ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್‌ರವರ, ಲೋಕೋಪಯೋಗಿ ಇಲಾಖೆ, ಉಪ–ವಿಭಾಗ, ಯಲ್ಲಾಪುರ ಇವರಿಗೆ ಲಿಖಿತ ಹೇಳಿಕೆಯನ್ನು ನೀಡಿದ್ದು, ಸದರೀ ಹೇಳಿಕೆಯಲ್ಲಿ ದಿನಾಂಕ:08.07.2002ರ ವರೆಗೆ ಕೆಲಸ ಮಾಡುತ್ತಿದ್ದ ಸಮಯದಲ್ಲಿ ಟೈಫರ್ಡ್ ಜ್ವರ ಬಂದಿದ್ದು, ವೈದ್ಯರು 4 ರಿಂದ 5 ತಿಂಗಳು ವಿಶ್ರಾಂತಿ ಪಡೆಯಲು ಸೂಚಿಸಿರುತ್ತಾರೆಂದು ತಿಳಿಸಿರುತ್ತಾರೆ. ತದನಂತರ ವಾತದ ರೀತಿಯಲ್ಲಿ ಕಾಯಿಲೆ ಪ್ರಾರಂಭವಾಗಿದ್ದು, ಕಾಲಿನ ಗಂಟು ಬಾತು ನಡೆಯಲು ಸಾಧ್ಯವಾಗದೇ ಇರುವುದರಿಂದ ಸದರೀ ಕಾಯಿಲೆಗೆ ಹಳ್ಳಿ ವೈದ್ಯರ ಬಳಿ ಚಿಕಿತ್ಸೆ ಪಡೆದಿರುವುದಾಗಿ ತಿಳಿಸಿರುತ್ತಾರೆ. ಅನಾರೋಗ್ಯ ಇದ್ದುದರಿಂದ ಕೆಲಸಕ್ಕೆ ಹಾಜರಾಗಲು ಸಾಧ್ಯವಾಗಿರುವುದಿಲ್ಲ ಮತ್ತು ರಜಾ ಅರ್ಜಿ ಸಲ್ಲಿಸಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿದ್ದು, ಈಗ ಆರೋಗ್ಯ ಸುಧಾರಿಸುತ್ತಿರುವುದರಿಂದ ತಪ್ಪನ್ನು ಮನ್ನಿಸಿ, ಕೆಲಸ ನಿರ್ವಹಿಸಲು ಅವಕಾಶ ಮಾಡಿಕೊಡುವಂತೆ ವಿನಂತಿಸಿರುತ್ತಾರೆ.

ಈ ಬಗ್ಗೆ ಉಲ್ಲೇಖ (13)ರ ಪತ್ರದಲ್ಲಿ ಕಾರ್ಯನಿರ್ವಾಹಕ ಇಂಜಿನೀಯರ್, ಲೋಕೋಪಯೋಗಿ ಇಲಾಖೆ, ಕಾರವಾರ ವಿಭಾಗರವರಿಗೆ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಲೋಕೋಪಯೋಗಿ ಇಲಾಖೆ, ಉಪ–ವಿಭಾಗ, ಯಲ್ಲಾಪುರ ಇವರಿಂದ ವರದಿ ಸಲ್ಲಿಸಲಾಗಿತ್ತು. ಉಲ್ಲೇಖ (14)ರ ಪತ್ರದಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಯಲ್ಲಾಪುರ ಉಪ–ವಿಭಾಗ ಇವರು ಸದರಿ ನೌಕರರಿಗೆ ಅನಧೀಕೃತ ಗೈರು ಹಾಜರಿಯ ಅವಧಿಯಲ್ಲಿ ಆರೋಗ್ಯ ಸರಿ ಇಲ್ಲದೆ ಇರುವ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ನೀಡುವಂತೆ ಸೂಚಿಸಿರುತ್ತಾರೆ.

ಸದರೀ ನೌಕರರು ವೈದ್ಯಕೀಯ ಪ್ರಮಾಣ ಪತ್ರವನ್ನು ಹಾಜರುಪಡಿಸದೇ ಕರ್ತವ್ಯಕ್ಕೆ ಗೈರು ಹಾಜರಾಗಿರುವುದರಿಂದ ಉಲ್ಲೇಖ (15)ರ ಪತ್ರದಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಯಲ್ಲಾಪುರ ಇವರು ಸದರೀ ನೌಕರರಿಗೆ ಸರ್ಕಾರಿ ಕೆಲಸದಲ್ಲಿ ಮುಂದುವರೆಯಲು ಆಸಕ್ತಿ ಇಲ್ಲದೇ ಇರುವುದರಿಂದ ಇಲಾಖಾ ವಿಚಾರಣೆಯ ಅಂತಿಮ ವರದಿಯಂತೆ ಹಾಗೂ ಉಲ್ಲೇಖ (9)ರ ಪತ್ರದಲ್ಲಿ ಶಿಫಾರಸ್ಸು ಮಾಡಿರುವಂತೆ, ಸದರೀ ನೌಕರರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವಂತೆ ಮಾಡಿದ ಶಿಫಾರಸ್ಸನ್ನು ಪುರಸ್ಕರಿಸಿ, ಸೂಕ್ತ ನಿರ್ದೇಶನವನ್ನು ಕೋರಿದ್ದು, ಉಲ್ಲೇಖ (16)ರ ಮುಖ್ಯ ಇಂಜಿನೀಯರ್, ಸಂಪರ್ಕ ಮತ್ತು ಕಟ್ಟಡ (ಉ), ಧಾರವಾಡ ಇವರ ಪತ್ರ ಹಾಗೂ ಉಲ್ಲೇಖ (17)ರ ಅಧೀಕ್ಷಕ ಇಂಜಿನೀಯರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಧಾರವಾಡ ವೃತ್ತ, ಧಾರವಾಡ ರವರ ಹಿಂಬರಹ ಪತ್ರದಲ್ಲಿ ಶ್ರೀ ರುದ್ರಪ್ಪ ರಾಮಣ್ಣ ಭೋವಿವಡ್ಡರ, ಗ್ಯಾಂಗ್‌ಮನ್ (ಸೂಪರ್‌ನ್ಯೂಮರಿ ಹುದ್ದೆ) ಇವರು ದಿನಾಂಕ:08.07.2002 ರಿಂದ ಕೆಲಸಕ್ಕೆ ಅನಧೀಕೃತವಾಗಿ ಗೈರು ಹಾಜರಾದ ಕಾರಣ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8ರ ಪ್ರಕಾರ ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ/18ಸೇಇವಿ/2001 ದಿನಾಂಕ:14.09.2001ರಲ್ಲಿ ನಿರ್ದೇಶಿಸಿದಂತೆ ಕ್ರಮಕೈಗೊಳ್ಳಲು ತಿಳಿಸಿರುತ್ತಾರೆ.

ಮೇಲೆ ವಿವರಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ, ಶ್ರೀ ರುದ್ರಪ್ಪ ರಾಮಣ್ಣ ಭೋವಿವಡ್ಡರ, ಗ್ಯಾಂಗ್‌ಮನ್ (ಸೂಪರ್‌ನ್ಯೂಮರಿ ಹುದ್ದೆ) ಅನಧೀಕೃತ ಗೈರು ಹಾಜರು ಇವರನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8ರ VII ರಂತೆ ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ/18ಸೇಇವಿ/2001 ದಿನಾಂಕ:14.09.2001 ಪ್ರಕಾರ ದಿನಾಂಕ:08.07.2002 ರಿಂದ ಅನ್ವಯವಾಗುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಲು ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣದ ಹಿನ್ನೆಲೆಯಲ್ಲಿ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 VII ರಂತೆ ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ/18ಸೇಇವಿ/2001 ದಿನಾಂಕ:14.09.2001ರಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ–ವಿಭಾಗ, ಯಲ್ಲಾಪುರ ಕಛೇರಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದ (ಅನಧೀಕೃತ ಗೈರು ಹಾಜರಿಯಲ್ಲಿರುವ) ಶ್ರೀ ರುದ್ರಪ್ಪ ರಾಮಣ್ಣ ಭೋವಿವಡ್ಡರ, ಗ್ಯಾಂಗ್‌ಮನ್ (ಸೂಪರ್‌ನ್ಯೂಮರಿ ಹುದ್ದೆ) ಇವರನ್ನು ದಿನಾಂಕ:08.07.2002 ರಿಂದ ಜಾರಿಗೆ ಬರುವಂತೆ ಮತ್ತೆ ಸರ್ಕಾರಿ ನೌಕರಿಯ ಪ್ರವೇಶಕ್ಕೆ ಅನರ್ಹತೆಯಾಗದ ಹಾಗೆ **"ಸೇವೆಯಿಂದ ವಜಾ"** ಮಾಡಲಾಗಿದೆ.

**ವಿಜಯಕುಮಾರ್**

ಕಾರ್ಯನಿರ್ವಾಹಕ ಇಂಜಿನೀಯರರು ಹಾಗೂ ರಾಜ್ಯ ಹೆದ್ದಾರಿ ಪ್ರಾಧಿಕಾರಿ ಅಧಿಕಾರಿ ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ಶಿರಸಿ (ಉತ್ತರ ಕನ್ನಡ ಜಿಲ್ಲೆ).

ಪಿ.ಆರ್.1270

## ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)
## ಕಾರ್ಯನಿರ್ವಾಹಕ ಅಭಿಯಂತರ ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ
## ಅಧಿಸೂಚನೆ
### ಸಂಖ್ಯೆ: ಕಾನಿಅ/ಸನೀವಿ/ಕು/ಸಿ–1/2009–10/2194, ದಿನಾಂಕ:16ನೇ ನವೆಂಬರ್, 2009

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22)ರ ಅಡಿಯಲ್ಲಿ ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ, ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರಿ ಅಧಿನಿಯಮದ ಸೆಕ್ಷನ್ 5(1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ ಸೆಕ್ಷನ್ 19(1)ರಡಿಯಲ್ಲಿ "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

| ಕ್ರ. ಸಂ. | ಕಛೇರಿ ಮತ್ತು ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|---|
| 1. | ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ. | ಶ್ರೀ ಟಿ. ಜಯಾನಂದಂ, ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ. | ಶ್ರೀ ಸಿ. ಜೈಪ್ರಕಾಶ (ಪ್ರಭಾರಿ) ತಾಂತ್ರಿಕ ಸಹಾಯಕರು, ಕಾರ್ಯನಿರ್ವಾಹಕ ಅಭಿಯಂತರವರ ಕಛೇರಿ ಸಣ್ಣ ನೀರಾವರಿ ವಿಭಾಗ, ಕುಷ್ಟಗಿ. | ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಗುಲ್ಬರ್ಗಾ. |

**ಟಿ. ಜಯಾನಂದಂ**

ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ.

ಪಿ.ಆರ್.1271

## ಭೂದಾಖಲೆಗಳ ಜಂಟಿ ನಿರ್ದೇಶಕರವರ ಕಚೇರಿ, ನಗರ ಮಾಪನ, ದಕ್ಷಿಣ ವಲಯ, ಬೆಂಗಳೂರು
## ಅಧಿಸೂಚನೆ
### ನಂ. ತಾಂ (1) (ಶಿ)ನಮಾ/20/09–10, ದಿನಾಂಕ:15ನೇ ಡಿಸೆಂಬರ್, 2009

ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ. ಕಂ.ಇ. 289 ಭೂದಾಸ 2009 ಬೆಂಗಳೂರು ದಿನಾಂಕ: 5.12.2009 ರ ಮೇರೆಗೆ ನಿರ್ದೇಶಿಸಿದಂತೆ ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಬೆಂಗಳೂರು ಆದ ನಾನು ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ರ ಕಲಂ 148 (1) ರ ಕೆಳಗೆ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಶಿವಮೊಗ್ಗ ಜಿಲ್ಲೆಯ ಶಿವಮೊಗ್ಗ ಪಟ್ಟಣದ ವ್ಯಾಪ್ತಿಯಲ್ಲಿ ಈ ಕೆಳಗಿನ ಅನುಸೂಚಿ ( ಷೆಡ್ಯೂಲ್ ) ಯಲ್ಲಿ ವಿವರಿಸಿರುವ ಆಸ್ತಿಗಳು ಶಿವಮೊಗ್ಗ ನಗರ ಮಾಪನ ಪರಿಮಿತಿಯಲ್ಲಿ ನಗರ ಮಾಪನ ಉದ್ದೇಶಕ್ಕೆ ಹಾಗೂ ಗಡಿ ನಿರ್ಧಾರಕ್ಕೆ ಈಗ ಇರುವ ಹಕ್ಕು ಬಾಧ್ಯತೆಗಳಿಗೆ ಧಕ್ಕೆ ಇಲ್ಲದಂತೆ ಬರುತ್ತವೆ ಎಂದು ಘೋಷಿಸುತ್ತೇನೆ.

ಶಿವಮೊಗ್ಗ ನಗರಮಾಪನ ವ್ಯಾಪ್ತಿಗೆ ಒಳಪಡುವ ಜಮೀನುಗಳ ವಿವರಗಳನ್ನು ತೋರಿಸುವ ನಕ್ಷೆಯನ್ನು ಈ ಕೆಳಕಂಡ ಕಚೇರಿಗಳಲ್ಲಿ ಕೆಲಸದ ವೇಳೆಯಲ್ಲಿ ಸಾರ್ವಜನಿಕರ ವೀಕ್ಷಣೆಗೆ ಇಡಲಾಗಿದೆ.

1) ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಬೆಂಗಳೂರು
2) ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ಶಿವಮೊಗ್ಗ ಹಾಗೂ ನಗರ ಮಾಪನ ಯೋಜನಾ ಅಧಿಕಾರಿಗಳು, ಜಿಲ್ಲಾಧಿಕಾರಿಗಳ ಕಚೇರಿ, ಶಿವಮೊಗ್ಗ.
3) ಪೌರಾಯುಕ್ತರು, ಶಿವಮೊಗ್ಗ ನಗರ ಸಭೆ, ಶಿವಮೊಗ್ಗ.

**ಅನುಸೂಚಿ (ಷೆಡ್ಯೂಲ್)**

**ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ನಗರ, ನಗರ ಮಾಪನ ವ್ಯಾಪ್ತಿಗೆ ಒಳಪಡುವ ಆಸ್ತಿಗಳ ವಿವರಗಳನ್ನು ತೋರಿಸುವ ತ:ಖ್ತೆ**

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮ | ಸರ್ವೆ ನಂಬರ್, ರಸ್ತೆ, ಊರುವಗ್ಗೈರೆ | ವಿಸ್ತೀರ್ಣ | | ಷರಾ |
|---|---|---|---|---|---|---|---|
| | | | | | ಎಕರೆ | ಗುಂಟೆ | |
| 1) | ಶಿವಮೊಗ್ಗ | ಕಸಬ | ಕಾಶೀಪುರ | ರೀಸ.ನಂ.1 ರಿಂದ 88 ವರೆಗೆ | 123 | 37 | ಪೂರಾ ಗ್ರಾಮ |
| | | | | ಊರುವಗ್ಗೈರೆ | 8 | 20 | |
| | | | | **ಒಟ್ಟು ವಿಸ್ತೀರ್ಣ** | **132** | **17** | |
| 2) | ಶಿವಮೊಗ್ಗ | ಕಸಬ | ಕಲ್ಲಹಳ್ಳಿ | ರೀ ಸನಂ.1 ರಿಂದ 127 ವರೆಗೆ | 894 | 6 | ಪೂರಾ ಗ್ರಾಮ |
| | | | | ಊರುವಗ್ಗೈರೆ | 35 | 33 | |
| | | | | **ಒಟ್ಟು ವಿಸ್ತೀರ್ಣ** | **929** | **39** | |
| 3) | ಶಿವಮೊಗ್ಗ | ಕಸಬ | ಶ್ರೀಗಂಧದ ಕಾವಲು | ರೀ ಸನಂ.1 | 113 | 34 | ಪೂರಾ ಗ್ರಾಮ |
| | | | | **ಒಟ್ಟು ವಿಸ್ತೀರ್ಣ** | **113** | **34** | |
| 4) | ಶಿವಮೊಗ್ಗ | ಕಸಬ | ಗೋಪಾಳ | ರೀ ಸನಂ.1 ರಿಂದ 82 ವರೆಗೆ | 624 | 25 | ಪೂರಾ ಗ್ರಾಮ |
| | | | | ಊರುವಗ್ಗೈರೆ | 21 | 35 | |
| | | | | **ಒಟ್ಟು ವಿಸ್ತೀರ್ಣ** | **646** | **20** | |
| 5) | ಶಿವಮೊಗ್ಗ | ಕಸಬ | ಆಲುಕೊಳ | ರೀ ಸ.ನಂ.1 ರಿಂದ 113 ವರೆಗೆ | 703 | 10 | ಪೂರಾ ಗ್ರಾಮ |
| | | | | ಊರುವಗ್ಗೈರೆ | 23 | 0 | |
| | | | | **ಒಟ್ಟು ವಿಸ್ತೀರ್ಣ** | **726** | **10** | |
| 6) | ಶಿವಮೊಗ್ಗ | ಕಸಬ | ಗಾಡಿಕೊಪ್ಪ | ರೀ ಸನಂ.1 ರಿಂದ 92 ವರೆಗೆ | 449 | 11 | ಪೂರಾ ಗ್ರಾಮ |
| | | | | ಊರುವಗ್ಗೈರೆ | 34 | 19 | |
| | | | | **ಒಟ್ಟು ವಿಸ್ತೀರ್ಣ** | **483** | **30** | |
| 7) | ಶಿವಮೊಗ್ಗ | ಕಸಬ | ವೆಂಕಟಾಪುರ | ರೀ ಸನಂ.1 ರಿಂದ 2 ವರೆಗೆ | 25 | 12 | ಪೂರಾ ಗ್ರಾಮ |
| | | | | **ಒಟ್ಟು ವಿಸ್ತೀರ್ಣ** | **25** | **12** | |
| 8) | ಶಿವಮೊಗ್ಗ | ಕಸಬ | ಸೋಮಿನಕೊಪ್ಪ | ರೀ ಸನಂ.1 ರಿಂದ 51, 70 ರಿಂದ 74, 80 ರಿಂದ 142 ವರೆಗೆ | 674 | 0 | ಪೈಕಿ ಗ್ರಾಮ |
| | | | | ಊರುವಗ್ಗೈರೆ | 31 | 0 | |
| | | | | **ಒಟ್ಟು ವಿಸ್ತೀರ್ಣ** | **705** | **0** | |

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮ | ಸರ್ವೆ ನಂಬರ್, ರಸ್ತೆ, ಊರುವಗೈರೆ | ವಿಸ್ತೀರ್ಣ ಎಕರೆ | ವಿಸ್ತೀರ್ಣ ಗುಂಟೆ | ಷರಾ |
|---|---|---|---|---|---|---|---|
| 9) | ಶಿವಮೊಗ್ಗ | ಕಸಬ | ಮಂಡ್ಲಿ | ರೀ ಸನಂ 1 ರಿಂದ 2, 8ರಿಂದ 34, 46 ರಿಂದ 74, 130 ರಿಂದ 204, 211 ರಿಂದ 263, 268 ರಿಂದ 271 ವರೆಗೆ. | 491 | 13 1/2 | ಪೈಕಿ ಗ್ರಾಮ |
| | | | | ಊರುವಗೈರೆ | 81 | 39 | |
| | | | | **ಒಟ್ಟು ವಿಸ್ತೀರ್ಣ** | **573** | **12 1/2** | |
| 10) | ಶಿವಮೊಗ್ಗ | ಕಸಬ | ಮುಳ್ಳುಕೆರೆ | ರೀ ಸನಂ.1 ರಿಂದ 98 ವರೆಗೆ | 351 | 15 | |
| | | | | ಊರುವಗೈರೆ | 126 | 25 | ಪೂರಾ |
| | | | | **ಒಟ್ಟು ವಿಸ್ತೀರ್ಣ** | **478** | **0** | ಗ್ರಾಮ |
| 11) | ಶಿವಮೊಗ್ಗ | ಕಸಬ | ಶಿವಮೊಗ್ಗ | ರೀ ಸನಂ.1 ರಿಂದ 46 ವರೆಗೆ | 320 | 24 | |
| | | | | ಊರುವಗೈರೆ | 522 | 9 | ಪೂರಾ |
| | | | | **ಒಟ್ಟು ವಿಸ್ತೀರ್ಣ** | **842** | **33** | ಗ್ರಾಮ |
| 12) | ಶಿವಮೊಗ್ಗ | ಕಸಬ | ನವುಲೆ | ರೀ ಸನಂ.1 ರಿಂದ 183 ವರೆಗೆ | 1280 | 24 | |
| | | | | ಊರುವಗೈರೆ | 42 | 39 | ಪೂರಾ |
| | | | | **ಒಟ್ಟು ವಿಸ್ತೀರ್ಣ** | **1323** | **23** | ಗ್ರಾಮ |
| 13) | ಶಿವಮೊಗ್ಗ | ಕಸಬ | ಮಿಳಘಟ್ಟ | ರೀ.ಸನಂ.1 ರಿಂದ 108 ವರೆಗೆ | 381 | 15 | ಪೂರಾ ಗ್ರಾಮ |
| | | | | ಊರುವಗೈರೆ | 382 | 21 | |
| | | | | **ಒಟ್ಟು ವಿಸ್ತೀರ್ಣ** | **763** | **36** | |
| 14) | ಶಿವಮೊಗ್ಗ | ನಿದಿಗೆ | ಇಸ್ಲಾಪುರ | ರೀ.ಸನಂ.1ರಿಂದ 4,6, 8 ರಿಂದ 29, 31,32, 36,37,45 ರಿಂದ 86 ವರೆಗೆ | 254 | 21 | ಪೈಕಿ ಗ್ರಾಮ |
| | | | | ಊರುವಗೈರೆ | 113 | 7 | |
| | | | | **ಒಟ್ಟು ವಿಸ್ತೀರ್ಣ** | **367** | **28** | |
| 15) | ಶಿವಮೊಗ್ಗ | ಕಸಬ | ಗೋಪಶೆಟ್ಟಿಕೊಪ್ಪ | ರೀ.ಸನಂ.1, 23 ರಿಂದ 26, 36 ರಿಂದ 43, 52,53,55 ರಿಂದ 95, 161 ರಿಂದ 175 ವರೆಗೆ. | 331 | 19 | ಪೈಕಿ ಗ್ರಾಮ |
| | | | | ಊರುವಗೈರೆ | 13 | 29 | |
| | | | | **ಒಟ್ಟು ವಿಸ್ತೀರ್ಣ** | **345** | **8** | |

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮ | ಸರ್ವೆ ನಂಬರ್, ರಸ್ತೆ, ಊರುವಗೈರೆ | ವಿಸ್ತೀರ್ಣ | | ಷರಾ |
|---|---|---|---|---|---|---|---|
| | | | | | ಎಕರೆ | ಗುಂಟೆ | |
| 16) | ಶಿವಮೊಗ್ಗ | ಕಸಬ | ತೇವರಚಟ್ನಹಳ್ಳಿ | ರೀ.ಸನಂ.32 ರಿಂದ 92, 96,125,126,127, 166 ರಿಂದ 179, 182,184 ರಿಂದ 189 ವರೆಗೆ. | 393 | ###### | ಪೈಕಿ ಗ್ರಾಮ |
| | | | | ಊರುವಗೈರೆ | 92 | 0 | |
| | | | | **ಒಟ್ಟು ವಿಸ್ತೀರ್ಣ** | **485** | ###### | |
| 17) | ಶಿವಮೊಗ್ಗ | ಕಸಬ | ಚನ್ನಮುಂಬಾಪುರ | ರೀ.ಸನಂ.3 ರಿಂದ 38 ವರೆಗೆ | 183 | 17 | ಪೈಕಿ ಗ್ರಾಮ |
| | | | | ಊರುವಗೈರೆ | 6 | 19 | |
| | | | | **ಒಟ್ಟು ವಿಸ್ತೀರ್ಣ** | **189** | **36** | |
| 18) | ಶಿವಮೊಗ್ಗ | ಹೊಳಲೂರು | ಬಸವನಗಂಗೂರು | ರೀ.ಸನಂ.89 ರಿಂದ 93, 101 ರಿಂದ 111 ವರೆಗೆ | 153 | 20 | ಪೈಕಿ ಗ್ರಾಮ |
| | | | | ಊರುವಗೈರೆ | 20 | 6 | |
| | | | | **ಒಟ್ಟು ವಿಸ್ತೀರ್ಣ** | **173** | **26** | |
| 19) | ಶಿವಮೊಗ್ಗ | ನಿದಿಗೆ | ಸೂಳೇಬೈಲು | ರೀ.ಸನಂ.1 ರಿಂದ 4, 7ರಿಂದ 10, 44,45,52 ರಿಂದ 111 ವರೆಗೆ | 278 | 10 | ಪೈಕಿ ಗ್ರಾಮ |
| | | | | ಊರುವಗೈರೆ | 13 | 36 | |
| | | | | **ಒಟ್ಟು ವಿಸ್ತೀರ್ಣ** | **292** | **6** | |
| 20) | ಶಿವಮೊಗ್ಗ | ಹೊಳಲೂರು | ಮೋಜಪ್ಪನ ಹೊಸೂರು | ರೀ.ಸನಂ.8,10 ರಿಂದ 20,23 ರಿಂದ 32 ವರೆಗೆ | 77 | 0 | ಪೈಕಿ ಗ್ರಾಮ |
| | | | | ಊರುವಗೈರೆ | 3 | 3 | |
| | | | | **ಒಟ್ಟು ವಿಸ್ತೀರ್ಣ** | **80** | **3** | |
| 21) | ಶಿವಮೊಗ್ಗ | ನಿದಿಗೆ | ಪುರಲೆ | ರೀ.ಸನಂ.1 ರಿಂದ 39,177 ವರೆಗೆ | 288 | 12 | ಪೈಕಿ ಗ್ರಾಮ |
| | | | | ಊರುವಗೈರೆ | 189 | 21 | |
| | | | | **ಒಟ್ಟು ವಿಸ್ತೀರ್ಣ** | **477** | **33** | |
| 22) | ಶಿವಮೊಗ್ಗ | ಕಸಬ | ಮಲ್ಲಿಗೇನಹಳ್ಳಿ | ರೀ.ಸನಂ.1 ರಿಂದ 8,10 ರಿಂದ 13, 18 ರಿಂದ 73, 76 ರಿಂದ 79, 108 ವರೆಗೆ | 449 | 27 1/4 | ಪೈಕಿ ಗ್ರಾಮ |
| | | | | ಊರುವಗೈರೆ | 28 | 7 | |
| | | | | **ಒಟ್ಟು ವಿಸ್ತೀರ್ಣ** | **477** | **34 1/4** | |

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮ | ಸರ್ವೆ ನಂಬರ್, ರಸ್ತೆ, ಊರುವಗ್ಗೈರೆ | ವಿಸ್ತೀರ್ಣ | | ಷರಾ |
|---|---|---|---|---|---|---|---|
| | | | | | ಎಕರೆ | ಗುಂಟೆ | |
| 23) | ಶಿವಮೊಗ್ಗ | ನಿದಿಗೆ | ಹರಿಗೆ | ರೀ.ಸನಂ.1,2, 94ರಿಂದ 142, 150,152, 190 ರಿಂದ 205 ವರೆಗೆ | 365 | 24 | ಪೈಕಿ ಗ್ರಾಮ |
| | | | | ಊರುವಗ್ಗೈರೆ | 53 | 35 | |
| | | | | **ಒಟ್ಟು ವಿಸ್ತೀರ್ಣ** | **419** | **19** | |
| 24) | ಶಿವಮೊಗ್ಗ | ನಿದಿಗೆ | ಊರಗಡೂರು | ರೀ.ಸನಂ.1 ರಿಂದ 90, 93,124 ರಿಂದ 158, 209 ರಿಂದ 219, 223 ರಿಂದ 226, 296 ರಿಂದ 306, 318 ರಿಂದ 321, 331 ರಿಂದ 357 ವರೆಗೆ | 504 | 21 1/2 | ಪೈಕಿ ಗ್ರಾಮ |
| | | | | ಊರುವಗ್ಗೈರೆ | 223 | 30 | |
| | | | | **ಒಟ್ಟು ವಿಸ್ತೀರ್ಣ** | **728** | **11 1/2** | |
| 25) | ಶಿವಮೊಗ್ಗ | ಕಸಬ | ಬೊಮ್ಮನಕಟ್ಟೆ | ರೀ.ಸನಂ.1 ರಿಂದ 161 ವರೆಗೆ | 637 | 2 | ಪೂರಾ ಗ್ರಾಮ |
| | | | | ಊರುವಗ್ಗೈರೆ | 35 | 17 | |
| | | | | **ಒಟ್ಟು ವಿಸ್ತೀರ್ಣ** | **672** | **19** | |

**ಎಂ. ಶಿವಮಾದಯ್ಯ**

ಪಿ.ಆರ್.1289

ಭೂದಾಖಲೆಗಳ ಜಂಟಿ ನಿರ್ದೇಶಕರು,
ನಗರ ಮಾಪನ, ದಕ್ಷಿಣ ವಲಯ, ಬೆಂಗಳೂರು.

**AMANATH CO-OPERATIVE BANK LIMITED, N.R. ROAD BRANCH**

**FORM-7**

**RULE 38(2) (C)**

**Dispute No.JRD/UBF/1541/2004-2005**

**E.P.No.AR/RO/(U/441)/ CEP/14/2009-2010**

**ATTACHMENT OF IMMOVABLE PROPERTY**

Amanath Co-operative Bank Limited, N.R.Road, Branch, Bangalore-560 002, has obtained an Award/Decree in the mentioned dispute against M/s A.S. & Company, Bangalore, represented by 1) Mohammed Yousuff, (2) Rafi Baig @ Rafi, (3) Akram Khan, Khwaja Mansion, Das Compound, R.V. Road, Cross, Basavanagudi, Bangalore-560 004, after issuance of notices, to recover an amount of Rs.6,05,90,910/- (Six hundred five lakhs ninety thousand nine hundred and ten only) along with further interest @ 17.5% + 2% penal interest from 01.12.2005, which has not been paid by you. As a loanee you are due to the bank a sum of Rs.13,22,71,000/- (One thousand three hundred twenty two lakhs and seventy one thousand only) as on 30.11.2009 along with further interest and other charges from 01.12.2009. This notice is to inform you that the following immovable property has been attached and if the entire amount due to the bank is not repaid by you along with interest and other charges within ten

days from the date of receipt of this notice, the immovable properties that have been attached will be brought for auction/ sale AS PER KSC ACT 1959 & RULES 1960.

The immovable property belonging to 1) Akram Khan (2) Farah Rafi (3) Moin Arfath(4) Hira Rafi, (5) Haya Rafi, (6) Hajira Fiza (7) Fahad Pasha.

**SCHEDULE**

All that piece and parcel of land and building bearing Survey Number 56/17, measuring I Acre and 11 guntas including 5 guntas of karab land, situated at Hongasandra village, Begur Hobli, Bangalore South Taluk, Hosur Road, Bangalore.

**Bounded on:**

East by : Bangalore-Hosur Road

West by: Sy.No.56/14

North by: Sy.No.58/13

South by: Sy.No.56/18

Amanath Co-Operative Bank Limited,

PD-77 N.R. Road Branch, Bangalore.

**AMANATH CO-OPERATIVE BANK LIMITED, N.R. ROAD BRANCH**

**FORM-7**

**RULE 38(2) (C)**

**Dispute No.JRD/UBF/1541/2004-2005**

**E.P.No.AR/RO/(U/441)/ CEP/14/2009-2010**

**ATTACHMENT NOTICE OF IMMOVABLE PROPERTY**

Amanath Co-operative Bank Limited, N.R.Road, Branch, Bangalore-560 002, has obtained an Award/Decree in the mentioned dispute against M/s A.S. & Company, Bangalore, represented by 1) Mohammed Yousuff, (2) Rafi Baig @ Rafi, (3) Akram Khan, Khwaja Mansion, Das Compound, R.V. Road, Cross, Basavanagudi, Bangalore-560 004, after issuance of notices, to recover an amount of Rs.6,05,90,910/- (Six hundred five lakhs ninety thousand nine hundred and ten only) along with further interest @ 17.5% + 2% penal interest from 01.12.2005, which has not been paid by you. As a loanee you are due to the bank a sum of Rs.13,22,71,000/- (One thousand three hundred twenty two lakhs and seventy one thousand only) as on 30.11.2009 along with further interest and other charges from 01.12.2009. This notice is to inform you that the following immovable property has been attached and if the entire amount due to the bank is not repaid by you along with interest and other charges within ten days from the date of receipt of this notice, the immovable properties that have been attached will be brought for auction/ sale AS PER KSC ACT 1959 & RULES 1960.

**The immovable property belonging to Mr. Rafi Baig & Farah Rafi**

**SCHEDULE**

All that piece and parcel of land and building (Eastern portion) bearing No.198/1/situated at Das compound I cross, R.V. Road Cross, Basavanagudi, Bangalore-560 004, Municipal Division No51 (old No.33)

